## ಕರ್ನಾಟಕ ವಿಧಾನಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1332 |
| ಸದಸ್ಯರ ಹೆಸರು | ಶ್ರೀ. ಯು.ಬಿ.ವೆಂಕಟೇಶ್ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | 24.12.2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಯುವಕರನ್ನು ಕೃಷಿಯತ್ತ ಆಕರ್ಷಿಸಲು ಸರ್ಕಾರವು ತೆಗೆದುಕೊಳ್ಳುತ್ತಿರುವ ಕ್ರಮಗಳು ಯಾವುವು; | ರಾಜ್ಯದಲ್ಲಿ ಯುವಕರನ್ನು ಕೃಷಿಯತ್ತ ಆಕರ್ಷಿಸಲು ಸರ್ಕಾರವು ತೆಗೆದುಕೊಳ್ಳುತ್ತಿರುವ ಕ್ರಮಗಳ ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ. |
| ಆ. | ಈ ಸಂಬಂಧ ಯುವಕರ ಅಭಿಪ್ರಾಯ/ಅನಿಸಿಕೆಗಳ ಬಗ್ಗೆ ಯಾವುದಾದರೂ ಸಮೀಕ್ಷೆ ನಡೆಸಿದೆಯೇ; | ಈ ಸಂಬಂಧ ಯುವಕರ ಅಭಿಪ್ರಾಯ/ಅನಿಸಿಕೆಗಳ ಬಗ್ಗೆ ಕೃಷಿ ಇಲಾಖೆಯಿಂದ ಯಾವುದೇ ಸಮೀಕ್ಷೆಯನ್ನು ನಡೆಸಲಾಗಿರುವುದಿಲ್ಲ. |
| ಇ | ಕಳೆದ ಮೂರು ವರ್ಷಗಳಲ್ಲಿ ಕೃಷಿಯನ್ನು ತೊರೆದು ಬೇರೆ ಉದ್ಯೋಗದ ಸಲುವಾಗಿ ವಲಸೆ ಹೋದ ಯುವಕರ ಸಂಖ್ಯೆ ಎಷ್ಟು? (ಜಿಲ್ಲಾವಾರು ಮಾಹಿತಿ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಕೃಷಿಯನ್ನು ತೊರೆದು ಬೇರೆ ಉದ್ಯೋಗದ ಸಲುವಾಗಿ ವಲಸೆ ಹೋದ ಯುವಕರ ಮಾಹಿತಿಯು ಕೃಷಿ ಇಲಾಖೆಯಲ್ಲಿ ಲಭ್ಯವಿರುವುದಿಲ್ಲ. |

ಸಂಖ್ಯೆ: AGRI-ACT/193/ 2021

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

ಅನುಬಂಧ

Q. No. 1332

**ರಾಜ್ಯದಲ್ಲಿ ಯುವಕರನ್ನು ಕೃಷಿಯತ್ತ ಆಕರ್ಷಿಸಲು ಸರ್ಕಾರವು ತೆಗೆದುಕೊಳ್ಳುತ್ತಿರುವ ಕ್ರಮಗಳ ವಿವರ**

1. **ಕೃಷಿ ಯಾಂತ್ರೀಕರಣ ಮತ್ತು ಕೃಷಿ ಸಂಸ್ಕರಣೆ** :ಈ ಕಾರ್ಯಕ್ರಮದಡಿ ರೈತರು ಸಕಾಲದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಹಾಗೂ ಕೃಷಿ ಕಾರ್ಮಿಕರ ಮೇಲಿನ ಅವಲಂಬನೆಯನ್ನು ಕಡಿಮೆಮಾಡಲು ಕೃಷಿ ಯಂತ್ರೋಪಕರಣಗಳಿಗೆ ಸಹಾಯಧನ ಒದಗಿಸಲಾಗುತ್ತಿದೆ (ಸಣ್ಣ ಟ್ರ್ಯಾಕ್ಟರ್, ಪವರ್ ಟಿಲ್ಲರ್, ಭೂಮಿ ಸಿದ್ಧತೆ ಉಪಕರಣಗಳು, ನಾಟಿ/ಬಿತ್ತನೆ ಉಪಕರಣಗಳು, ಟ್ರ್ಯಾಕ್ಟರ್ / ಶಕ್ತಿಚಾಲಿತ ಸಸ್ಯ ಸಂರಕ್ಷಣಾ ಉಪಕರಣಗಳು, ಅಂತರ ಬೇಸಾಯ ಉಪಕರಣಗಳು, ತ್ಯಾಜ್ಯ ವಸ್ತುಗಳ ನಿರ್ವಹಣಾ ಉಪಕರಣಗಳು, ಕೊಯಿಲು ಮತ್ತು ಒಕ್ಕಣೆ ಮಾಡುವ ಉಪಕರಣಗಳು ಕೃಷಿ ಸಂಸ್ಕರಣಾ ಘಟಕಗಳು ಹಾಗೂ ಡೀಸಲ್ ಪಂಪ್ ಸೆಟ್‌ಗಳನ್ನು ಸಾಮಾನ್ಯ ರೈತರಿಗೆ ಶೇ.50 ರಷ್ಟು ಸಹಾಯಧನ ಹಾಗು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಶೇ.90 ರಷ್ಟು ಸಹಾಯಧನವನ್ನು ಗರಿಷ್ಠ ಮಿತಿ ರೂ. ಒಂದು ಲಕ್ಷದವರೆಗೆ ನೀಡಲಾಗುತ್ತಿದೆ. ಸಣ್ಣ ಟ್ರ್ಯಾಕ್ಟರ್‌ಗಳ ಖರೀದಿಗೆ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ರೂ.3.00 ಲಕ್ಷ ಹಾಗೂ ಸಾಮಾನ್ಯ ರೈತರಿಗೆ ರೂ. 0.75 ಲಕ್ಷಗಳಂತೆ ಗರಿಷ್ಠ ಸಹಾಯಧನವನ್ನು ನೀಡಲಾಗುತ್ತಿದೆ).

2. **ಕೃಷಿ ಯಂತ್ರಧಾರೆ:** ರಾಜ್ಯದಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಸಕಾಲದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಅನುವಾಗುವಂತೆ, ಕಡಿಮೆ ಬಾಡಿಗೆ ದರದಲ್ಲಿ ಭೂಮಿ ಸಿದ್ಧತೆಯಿಂದ ಕೊಯ್ಲು ಮತ್ತು ಸಂಸ್ಕರಣೆಗೆ ಉಪಯುಕ್ತವಾಗುವ ವಿವಿಧ ಕೃಷಿ ಯಂತ್ರೋಪಕರಣಗಳನ್ನು ರೈತರಿಗೆ ಬಾಡಿಗೆ ಆಧಾರದ ಮೇಲೆ ಉಪಯೋಗಿಸಲು ಅವಕಾಶ ಕಲ್ಪಿಸಲು ಹೋಬಳಿ ಕೇಂದ್ರಗಳಲ್ಲಿ ಆಯ್ದ ಸಂಸ್ಥೆಗಳ ಸಹಯೋಗದೊಂದಿಗೆ ಕೃಷಿ ಯಂತ್ರಧಾರೆ (ಕೃಷಿ ಯಂತ್ರೋಪಕರಣ ಬಾಡಿಗೆ ಆಧಾರಿತ ಸೇವಾ) ಕೇಂದ್ರಗಳನ್ನು ತೆರೆಯಲಾಗಿರುತ್ತದೆ.

3. **ಮುಖ್ಯಮಂತ್ರಿಯವರ ಸೂಕ್ಷ್ಮ ನೀರಾವರಿ ಯೋಜನೆ:** ರಾಜ್ಯದಲ್ಲಿ ಲಭ್ಯವಿರುವ ನೀರನ್ನು ಸಮರ್ಥ ಮತ್ತು ಸಮರ್ಪಕ ಬಳಕೆಗೆ ಪ್ರೋತ್ಸಾಹಿಸಲು ಹಾಗೂ ಮಿತ ಬಳಕೆಯಿಂದ ಅಧಿಕ ಇಳುವರಿ ಪಡೆಯಲು ಹಾಗೂ ಸೂಕ್ಷ್ಮ (ಹನಿ/ತುಂತುರು) ನೀರಾವರಿ ಪದ್ಧತಿಯ ಅಳವಡಿಕೆಗೆ 2.00 ಹೆಕ್ಟೇರ್ ನಷ್ಟು ಕೃಷಿ ಭೂಮಿಯನ್ನು ಹೊಂದಿರುವ ಪರಿಶಿಷ್ಟ ವರ್ಗ, ಪರಿಶಿಷ್ಟ ಪಂಗಡ ಮತ್ತು ಸಣ್ಣ ರೈತರಿಗೆ ಶೇ.90 ರಷ್ಟು ಸಹಾಯಧನ ಹಾಗು 5.00 ಹೆಕ್ಟೇರ್ ನಷ್ಟು ಕೃಷಿ ಭೂಮಿಯನ್ನು ಹೊಂದಿರುವ ಮಧ್ಯಮ ರೈತರಿಗೆಶೇ.45 ರಂತೆ ಸಹಾಯಧನ ಒದಗಿಸಲಾಗುತ್ತಿದೆ.

4. **ರಾಷ್ಟ್ರೀಯ ಸುಸ್ಥಿರ ಕೃಷಿ ಅಭಿಯಾನ ಯೋಜನೆಯಡಿ ಮಣ್ಣು ಆರೋಗ್ಯ ನಿರ್ವಹಣೆ** ಯೋಜನೆಯಡಿ ಗ್ರಾಮ ಮಟ್ಟದಲ್ಲಿ ಮಣ್ಣು ಪರೀಕ್ಷಾ ಪ್ರಯೋಗಾಲಯವನ್ನು ಸ್ಥಾಪಿಸಲು (Village level soil testing Lab) ಸ್ಥಾಪಿಸಲು ಆರ್ಥಿಕ ಸಹಾಯವನ್ನು ನೀಡಲಾಗುತ್ತದೆ. ಪ್ರಯೋಗಾಲಯದ ಒಟ್ಟು ವೆಚ್ಚ ರೂ. 5.00 ಲಕ್ಷಗಳಾಗಿದ್ದು, ಫಲಾನುಭವಿಗಳಿಗೆ ಯೋಜನಾ ವೆಚ್ಚದ ಶೇ.75.00ರಷ್ಟು ಆರ್ಥಿಕ ಸಹಾಯವನ್ನು ಸಬ್ಸಿಡಿಯನ್ನಾಗಿ ನೀಡಲಾಗುತ್ತದೆ.

5. **ಚಿಲ್ಲರೆ ಗೊಬ್ಬರ ಮಾರಾಟ ಪರವಾನಗಿ ವಿತರಣೆ:** ಯುವಜನತೆ ಕೃಷಿ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳಲು ಪ್ರೇರಣೆ ನೀಡುವ ನಿಟ್ಟಿನಲ್ಲಿ 2016ನೇ ಸಾಲಿನಿಂದ ಚಿಲ್ಲರೆ ಮಾರಾಟಗಾರರಿಗಾಗಿ ಪರವಾನಗಿ ನೀಡಲು ರಸಗೊಬ್ಬರ ನಿಯಂತ್ರಣ ಆದೇಶ 1985ರ ಪ್ರಕಾರ ಅರ್ಜಿದಾರರು ಯಾವುದೇ ರಾಜ್ಯ ಕೃಷಿ ವಿಶ್ವವಿದ್ಯಾಲಯ ಅಥವಾ ಕೃಷಿ ವಿಜ್ಞಾನ ಕೇಂದ್ರಗಳು ಅಥವಾ ರಾಷ್ಟ್ರೀಯ ಕೃಷಿ ವಿಸ್ತರಣೆ ನಿರ್ವಹಣೆ ಸಂಸ್ಥೆ (Manage) ಅಥವಾ ರಾಷ್ಟ್ರೀಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ಸಂಸ್ಥೆಗಳಿಂದ ಕೃಷಿ ವಿಷಯಕ್ಕೆ ಸಂಬಂಧಿಸಿದಂತೆ ಹದಿನೈದು ದಿನಗಳ ಪ್ರಮಾಣ ಪತ್ರ ಕೋರ್ಸ್ ಹೊಂದಿದವರಿಗೆ ಮಾತ್ರ ಚಿಲ್ಲರೆ ಮಾರಾಟ ಪರವಾನಗಿ ನೀಡಲಾಗುತ್ತಿದೆ.

6. **ರೈತಸಿರಿ:** ಸಿರಿಧಾನ್ಯಗಳಾದ ನವಣೆ, ಹಾರಕ, ಸಾಮೆ, ಕೊರಲೆ, ಊದಲು ಬೆಳೆಗಳನ್ನು ಬೆಳೆದ ಎಲ್ಲಾ ವರ್ಗದ ರೈತರಿಗೆ ಪ್ರತಿ ಹೆಕ್ಟೇರಿಗೆ ರೂ.10,000/-ದಂತೆ ಗರಿಷ್ಠ ಎರಡು ಹೆಕ್ಟೇರುಗಳಿಗೆ ಪ್ರೋತ್ಸಾಹ ಧನವನ್ನು ಫಲಾನುಭವಿಗಳಿಗೆ ನೇರ ನಗದು ವರ್ಗಾವಣೆ ಮೂಲಕ ನೀಡಲಾಗುತ್ತಿದೆ. ಸಿರಿ ಧಾನ್ಯಗಳನ್ನುಬೆಳೆದ ರೈತರುಗಳಿಗೆ ಬೆಳೆ ಸಮೀಕ್ಷೆ ಆಧಾರದಂತೆ ಪ್ರೋತ್ಸಾಹಧನವನ್ನುವಿತರಿಸಲಾಗುತ್ತಿದೆ.

7. **ರಾಷ್ಟ್ರೀಯ ಆಹಾರ ಭದ್ರತಾ ಯೋಜನೆ:** ಯುವಜನತೆ ಕೃಷಿ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳಲು ಪ್ರೇರಣೆ ನೀಡುವ ನಿಟ್ಟಿನಲ್ಲಿರಾಷ್ಟ್ರೀಯ ಆಹಾರ ಭದ್ರತಾ ಯೋಜನೆಯಡಿ ಭತ್ತ, ದ್ವಿದಳ ಧಾನ್ಯ, ನ್ಯೂಟ್ರಿಸೀರಿಯಲ್ಸ್, ಎಣ್ಣೆ ಕಾಳುಗಳಲ್ಲಿ ವಿವಿಧ ತಾಂತ್ರಿಕತೆಗಳ ಬಗ್ಗೆ ದೊಡ್ಡ ಪ್ರಮಾಣದ ಪ್ರಾತ್ಯಕ್ಷಿಕೆಗಳು ಹಾಗೂ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ.